# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 01. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 2035 |
| 02. | ಮಾನ್ಯ ವಿಧಾನ ಪರಿಷತ್ ಸದಸ್ಯರ ಹೆಸರು | : ಶ್ರೀ ಎಸ್. ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 03. | ಉತ್ತರಿಸುವ ದಿನಾಂಕ | : 17/03/2022 |
| 04. | ಉತ್ತರಿಸುವ ಸಚಿವರು. | : ಗೃಹ ಸಚಿವರು. |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 03 ವರ್ಷಗಳಲ್ಲಿ ಇಂಟರ್‌ನೆಟ್/ಮೊಬೈಲ್ ಫೋನ್/ ಆನ್‌ಲೈನ್ ಬಳಸಿ ಹಣ ವಂಚನೆ ಮಾಡುವ (ಸೈಬರ್ ಕ್ರೈಂ) ಎಷ್ಟು ಪ್ರಕರಣಗಳು ಬೆಳಕಿಗೆ ಬಂದಿವೆ: ಈ ಪೈಕಿ ಎಷ್ಟು ಪ್ರಕರಣಗಳಿಗೆ ಕೇಸ್ ದಾಖಲಿಸಲಾಗಿದೆ: ಎಷ್ಟು ಪ್ರಕರಣಗಳನ್ನು ಇತ್ಯರ್ಥಪಡಿಸಲಾಗಿದೆ: ಈ ಮೂಲಕ ಎಷ್ಟು ಹಣ ವಂಚಿಸಲಾಗಿದೆ: (ವರ್ಷಾವಾರು ವಿವರ ನೀಡುವುದು) | ರಾಜ್ಯದಲ್ಲಿ ಕಳೆದ 03 ವರ್ಷಗಳಲ್ಲಿ (2019, 2020, 2021, 2022 (ಫೆಬ್ರವರಿ ಅಂತ್ಯದವರೆಗೆ) ಇಂಟರ್ ನೆಟ್/ಮೊಬೈಲ್ ಫೋನ್ ಬಳಸಿ ಹಣ ವಂಚನೆ/ದೋಚುವ ಬಗ್ಗೆ ದಾಖಲಾದ ಪ್ರಕರಣಗಳ ವಿವರಗಳನ್ನು **ಅನುಬಂಧದಲ್ಲಿ** ನೀಡಲಾಗಿದೆ. |
| ಆ) | ರಾಜ್ಯದಲ್ಲಿ ಇಂಟರ್‌ನೆಟ್/ಮೊಬೈಲ್ ಫೋನ್/ಆನ್‌ಲೈನ್ ಮೂಲಕ ವಂಚನೆಗೊಳಗಾಗುತ್ತಿರುವವರ ಸಂಖ್ಯೆ ಪ್ರತಿದಿನ ಏರಿಕೆಯಾಗುತ್ತಿದ್ದು, ಇದಕ್ಕೆ ಅನುಸಾರವಾಗಿ ಸೈಬರ್ ಕ್ರೈಂ ಕೇಸ್‌ಗಳನ್ನು ಇತ್ಯರ್ಥಪಡಿಸಲು ಪ್ರತ್ಯೇಕ ಸಿಬ್ಬಂದಿಗಳನ್ನು ನೇಮಿಸಲಾಗುತ್ತಿದೆಯೇ: ಹಾಗಿದ್ದಲ್ಲಿ ಎಷ್ಟು ಪೊಲೀಸ್ ಠಾಣೆಗಳನ್ನು ಮತ್ತು ಸಿಬ್ಬಂದಿಗಳನ್ನು ನೇಮಿಸಲಾಗಿದೆ: (ಸಂಪೂರ್ಣ ವಿವರ ನೀಡುವುದು) | • ಸೈಬರ್ ಅಪರಾಧಗಳನ್ನು ಕಟ್ಟುನಿಟ್ಟಾಗಿ ನಿಯಂತ್ರಿಸಲು ಹಾಗೂ ಇಂತಹ ಪ್ರಕರಣಗಳನ್ನು ತಡೆಗಟ್ಟಲು ರಾಜ್ಯದ ಪ್ರತಿ ಜಿಲ್ಲೆ ಹಾಗೂ ನಗರಗಳಲ್ಲಿ ವಿಶೇಷ ಸೈಬರ್, ನಾರ್ಕೋಟಿಕ್ ಎಕನಾಮಿಕ್ ಪೊಲೀಸ್ ಠಾಣೆಗಳನ್ನು ಸ್ಥಾಪಿಸಲಾಗಿದೆ. ರಾಜ್ಯದಲ್ಲಿ ಒಟ್ಟು 46 ಸಿ.ಇ.ಎನ್ ಪೊಲೀಸ್ ಠಾಣೆಗಳು ಹಾಗೂ ಇವುಗಳ ಪೈಕಿ ಬೆಂಗಳೂರು ನಗರದಲ್ಲಿ ಮಾತ್ರ 8 ವಿಶೇಷ ಸಿ.ಇ.ಎನ್ ಪೊಲೀಸ್ ಠಾಣೆಗಳು ಪ್ರತಿ ವಿಭಾಗಕ್ಕೆ ಒಂದರಂತೆ ಕಾರ್ಯ ನಿರ್ವಹಿಸುತ್ತಿದೆ. ಅಂತೆಯೇ ಬೆಂಗಳೂರು ನಗರದಲ್ಲಿ ಒಂದು ಸೈಬರ್ ಕ್ರೈಂ ಪೊಲೀಸ್ ಠಾಣೆ ಹಾಗೂ ಸಿ.ಐ.ಡಿ ಘಟಕದಲ್ಲಿ ಒಂದು ಸೈಬರ್ ಕ್ರೈಂ ಪೊಲೀಸ್ ಠಾಣೆ ಕಾರ್ಯನಿರ್ವಹಿಸುತ್ತಿದೆ.<br>• ರಾಜ್ಯದ ಪ್ರತಿ ಸೈಬರ್ ಕ್ರೈಂ ಪೊಲೀಸ್ ಠಾಣೆಗಳಿಗೆ ಪ್ರತ್ಯೇಕವಾಗಿ ಒಬ್ಬ ಪಿಐ, ಪಿಎಸ್‌ಐ, ಹೆಚ್‌ಸಿ ಮತ್ತು ಪಿ.ಸಿ ದರ್ಜೆಯ ಅಧಿಕಾರಿ/ ಸಿಬ್ಬಂದಿಗಳನ್ನು ನೇಮಿಸಲಾಗಿರುತ್ತದೆ. |
| ಇ) | ಸೈಬರ್ ಕ್ರೈಂ ಕೇಸ್‌ಗಳನ್ನು ಇತ್ಯರ್ಥಪಡಿಸಲು ಸಿಬ್ಬಂದಿಗಳಿಗೆ ಬೇಕಾದ ಆಧುನಿಕ ತಂತ್ರಜ್ಞಾನದ ಪರಿಕರಗಳು ಮತ್ತು ತರಬೇತಿಯ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದ್ದಲ್ಲಿ ಈ ಸಮಸ್ಯೆಗಳನ್ನು ಪರಿಹರಿಸಲು ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | • ಸೈಬರ್ ಅಪರಾಧಗಳನ್ನು ತಡೆಗಟ್ಟುವ ಸಲುವಾಗಿ ಸಿ.ಐ.ಡಿ ಕಛೇರಿಯಲ್ಲಿ Centre for Cyber crime Investigation & Digital Forensic Training & Research ಘಟಕವನ್ನು ಪ್ರಾರಂಭಿಸಲಾಗಿದ್ದು, Data Security Council of India ರವರ ಸಹಯೋಗದೊಂದಿಗೆ ವಿಶೇಷ ಸೈಬರ್ ಪೊಲೀಸ್ ಠಾಣೆಯ ಅಧಿಕಾರಿಗಳು ಮತ್ತು ಸಿಬ್ಬಂದಿಗಳಿಗೆ ವಿಶೇಷ ತರಬೇತಿಯನ್ನು ನೀಡಲಾಗುತ್ತಿದೆ. |

| | | |
|---|---|---|
| | | ಸಿ.ಐ.ಡಿ. ಕಛೇರಿಯಲ್ಲಿ ಸಿ.ಎಫ್.ಯು ವಿಭಾಗವು ಹಿರಿಯ ಅಧಿಕಾರಿಗಳ ಉಸ್ತುವಾರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಸಿ.ಎಫ್.ಯು ವಿಭಾಗದಲ್ಲಿ ಆಧುನಿಕ ತಂತ್ರಜ್ಞಾನ ಬಳಸಿಕೊಂಡು ಪ್ರಕರಣಗಳನ್ನು ಭೇದಿಸಲಾಗುತ್ತಿದೆ.<br>• ಸರ್ಕಾರದಿಂದ ನ್ಯಾಶನಲ್ ಸೈಬರ್ ಕ್ರೈಂ ರಿಪೋರ್ಟಿಂಗ್ ಪೋರ್ಟಲ್ ಪ್ರಾರಂಭಿಸಿದ್ದು, ಸಾರ್ವಜನಿಕರು ತಮಗೆ ವಂಚನೆಯಾದ ಬಗ್ಗೆ ಈ ಪೋರ್ಟಲ್ ಮುಖಾಂತರ ದೂರು ಸಲ್ಲಿಸಿದಲ್ಲಿ ಇದರ ಮುಖಾಂತರ ಸಂಬಂಧಿಸಿದ ಬ್ಯಾಂಕಗಳಿಗೆ ಇ-ಮೇಲ್ ಮೂಲಕ ಸಂಪರ್ಕಿಸಿ ಆರೋಪಿತರ ಖಾತೆಗಳನ್ನು ಡೆಬಿಟ್ ಫ್ರೀಜ್ ಮಾಡಿಸಲು ಅನೂಕುಲವಾಗಿರುತ್ತದೆ.<br>• ತುರ್ತು ಸಹಾಯವಾಣಿ ಸಂಖ್ಯೆ 112 ಸಂಖ್ಯೆಯನ್ನು ಪ್ರಾರಂಭಿಸಿದ್ದು, ಸಾರ್ವಜನಿಕರು 24*7 ತುರ್ತಾಗಿ ಯಾವುದೇ ತರಹದ ವಂಚನೆ ಮತ್ತು ತೊಂದರೆಯಾದ ಬಗ್ಗೆ ಸಂಪರ್ಕಿಸಬಹುದಾಗಿರುತ್ತದೆ. |

**ಕಡತ ಸಂಖ್ಯೆ : ಹೆಚ್‌ಡಿ 29ಪಿಸಿಕ್ಯೂ 2022**

(ಆರಗ ಜ್ಞಾನೇಂದ್ರ)
ಗೃಹ ಸಚಿವರು

# ಅನುಬಂಧ

| ವರ್ಷ | ವರದಿಯಾಗಿರುವ ಒಟ್ಟು ಸೈಬರ್ ಪ್ರಕರಣಗಳ ಸಂಖ್ಯೆ | ಅವುಗಳ ಪೈಕಿ ಇಂಟರ್‌ನೆಟ್/ ಮೊಬೈಲ್ ಫೋನ್ ಬಳಸಿ ಹಣ ವಂಚಿಸಿರುವ ಪ್ರಕರಣಗಳ ಸಂಖ್ಯೆ | | ಪತ್ತೆ/ಇತ್ಯರ್ಥಪಡಿಸಿರುವ ಪ್ರಕರಣಗಳು | ವಂಚನೆ/ದೋಚಿರುವ ಹಣದ ಮೊತ್ತ |
|---|---|---|---|---|---|
| | | ಇಂಟರ್‌ನೆಟ್ | ಮೊಬೈಲ್ ಫೋನ್ | | |
| **2019** | 11721 | 10530 | 1018 | 2385 | 1563632743 |
| **2020** | 10189 | 2655 | 7266 | 3375 | 1008548364 |
| **2021** | 7694 | 2078 | 5310 | 2125 | 1582437027 |
| **2022** | 1735 | 266 | 1416 | 102 | 254373998 |